ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 831 |
| ಸದಸ್ಯರ ಹೆಸರು | ಡಾ. ವೈ.ಎ. ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) |
| ಉತ್ತರಿಸುವ ದಿನಾಂಕ | 11.03.2020 |
| ಉತ್ತರಿಸುವ ಸಚಿವರು | ಮಾನ್ಯ ಮುಜರಾಯಿ, ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಒಳನಾಡು ಜಲಸಾರಿಗೆಯ ನಿರ್ದಿಷ್ಟ ಮಾರ್ಗಗಳು ಯಾವುವು; ವಿವರಗಳನ್ನು ನೀಡುವದು; ಈ ಯೋಜನೆಗಳಿಗೆ ಸರ್ಕಾರ ಮೀಸಲಿಟ್ಟಿರುವ ಅನುದಾನ ಎಷ್ಟು; | ಕೇಂದ್ರ ಸರ್ಕಾರದಿಂದ National Waterways Act 2016ರಡಿ ಹೊಸದಾಗಿ 106 ರಾಷ್ಟ್ರೀಯ ಒಳನಾಡು ಜಲಮಾರ್ಗಗಳನ್ನು ಗುರುತಿಸಿ ಅಧಿಸೂಚನೆ ಹೊರಡಿಸಲಾಗಿದೆ. ಇದರಲ್ಲಿ ಕರ್ನಾಟಕ ರಾಜ್ಯದಲ್ಲಿ 11 ರಾಷ್ಟ್ರೀಯ ಒಳನಾಡು ಜಲಮಾರ್ಗಗಳು ಒಳಗೊಂಡಿದೆ. ಅವುಗಳ ವಿವರ ಈ ಕೆಳಗಿನಂತೆ ಇದೆ.<br><br>1. ಗುರುಪುರ ನದಿ — NW-43 — 10.014 Km<br>2. ಕಬಿನಿ ನದಿ — NW-51 — 23.171 Km<br>3. ಕಾಳಿ ನದಿ — NW-52 — 53.415 Km<br>4. ನೇತ್ರಾವತಿ ನದಿ — NW-74 — 30.00 Km<br>5. ಶರಾವತಿ ನದಿ — NW-90 — 27.674 Km<br>6. ಪಂಚಗಂಗಾವಲಿ — NW-76 — 23.00 Km<br>7. ಉದ್ಯಾವರ ನದಿ — NW-105 — 15.00 Km<br>8. ಘಟಪ್ರಭಾ ನದಿ — NW-41 — 112.00 Km<br>9. ಮಲಪ್ರಭಾ ನದಿ — NW-67 — 94.00 Km<br>10. ತುಂಗಭದ್ರಾ ನದಿ — NW-04 — 230.00 Km<br>11. ಭೀಮಾ ನದಿ — NW-21 — 139.00 Km<br><br>ಮೇಲಿನ ರಾಷ್ಟ್ರೀಯ ಒಳನಾಡು ಜಲಮಾರ್ಗಗಳ ಅಭಿವೃದ್ಧಿಗೆ ಪ್ರಸಕ್ತ ಸಾಲಿನಲ್ಲಿ ಯಾವುದೇ ಅನುದಾನ ಬಿಡುಗಡೆಗೊಂಡಿರುವುದಿಲ್ಲ.<br><br>ಉಳಿದಂತೆ ರಾಜ್ಯದ ತುಂಗಭದ್ರಾ, ಕಾವೇರಿ, ಶರಾವತಿ, ಕೃಷ್ಣ, ಭೀಮಾ, ಗಂಗಾವಳಿ, ಕಬಿನಿ, ಸ್ವರ್ಣಸೀತಾ, ಅಘನಾಶಿನಿ, ಗುರುಪುರ ಮತ್ತು ನೇತ್ರಾವತಿ ನದಿಗಳಲ್ಲಿ ಹಾಗೂ ಶರಾವತಿ ಹಿನ್ನೀರಿನ ಮುಳುಗಡೆ ಪ್ರದೇಶಗಳಲ್ಲಿ ಕಡವು ಸೇವೆಗಳನ್ನು ಸಾರ್ವಜನಿಕರ ಉಪಯೋಗಕ್ಕೆ ಒದಗಿಸಲಾಗಿದೆ. ಇಲಾಖಾ ವತಿಯಿಂದ 17 ಕಡವು ಸೇವೆಗಳನ್ನು ಹಾಗೂ ಹರಾಜು ಮೂಲಕ 29 ಕಡವು ಸೇವೆಗಳನ್ನು ಇಲಾಖಾ ಮೇಲುಸ್ತುವಾರಿಯಲ್ಲಿ ನಡೆಸಲಾಗುತ್ತಿದೆ.<br><br>ರಾಜ್ಯ ಸರಕಾರದ ವತಿಯಿಂದ ಸದರಿ ಕಡವು ಸೇವೆಗಳನ್ನು ನಿರ್ವಹಣೆ ಮಾಡಲು ಹಾಗೂ ರಾಜ್ಯದಲ್ಲಿ ಒಳನಾಡು ಜಲಸಾರಿಗೆ |

| | | |
|---|---|---|
| | | ಸೇವೆಗೆ ಅನುಕೂಲವಾಗುವಂತಹ ಮೂಲಭೂತ ಸೌಕರ್ಯಗಳನ್ನು ಹಾಗೂ ನಾವೆಗಳನ್ನು ಒದಗಿಸಲು ಪ್ರಸಕ್ತ ಆರ್ಥಿಕ ಸಾಲಿನಲ್ಲಿ ಸರ್ಕಾರವು ರೂ. 3.97 ಕೋಟಿ ಅನುದಾನವನ್ನು ಮೀಸಲಿಡಲಾಗಿದೆ. |
| ಆ) | ಕಳೆದ 5 ವರ್ಷಗಳಿಂದ ಈ ಒಳನಾಡು ಜಲಸಾರಿಗೆ ಮುಖಾಂತರ ಪ್ರಯಾಣಿಸಿದ ಪ್ರಯಾಣಿಕರ ಸಂಖ್ಯೆ ಎಷ್ಟು; ಹಾಗೂ ಈ ಮಾರ್ಗಗಳಲ್ಲಿ ಸಾಗಾಣಿಕೆಯಾದ ಸರಕುಗಳ ಪ್ರಮಾಣ ಎಷ್ಟು? | ಮೇಲೆ ತಿಳಿಸಿದ ಜಲಸಾರಿಗೆ ಮಾರ್ಗಗಳಲ್ಲಿ ಯಾವುದೇ ಸರಕು/ಪ್ರಯಾಣಿಕರು ಪ್ರಯಾಣ ಮಾಡಿರುವುದಿಲ್ಲ. ಆದರೆ ಕಳೆದ 5 ವರ್ಷಗಳಲ್ಲಿ 46 ಕಡವು ಸೇವೆ (Ferry Service) ಮುಖಾಂತರ ಪ್ರಯಾಣಿಸಿದ ಪ್ರಯಾಣಿಕರ ಹಾಗೂ ಸರಕುಗಳ ವಿವರ ಈ ಕೆಳಗಿನಂತಿದೆ. |

| ವರ್ಷ | ಪ್ರಯಾಣಿಕರು | ಸರಕುಗಳು (ಟನ್‌ಗಳಲ್ಲಿ) |
|---|---|---|
| 2014–15 | 21,01,994 | 10,756 |
| 2015–16 | 21,53,741 | 2,659 |
| 2016–17 | 21,71,555 | --- |
| 2017–18 | 21,57,047 | 11,958 |
| 2018–19 | 17,81,509 | 2,110 |

**(ಲೋಇ 02 ಪಿಜಿಎಲ್ 2020)**

**(ಕೋಟಾ ಶ್ರೀನಿವಾಸ ಪೂಜಾರಿ)**
**ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು**
**ಮತ್ತು ಒಳನಾಡು ಜಲಸಾರಿಗೆ ಸಚಿವರು**